# ಕರ್ನಾಟಕ ವಿಧಾನ ಪರಿಷತ್ತು

ಸದಸ್ಯರ ಹೆಸರು : ಶ್ರೀ ಬಸವರಾಜ ಶಿವಲಿಂಗಪ್ಪ ಹೊರಟ್ಟಿ (ಶಿಕ್ಷಕರ ಕ್ಷೇತ್ರ)
ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ : 41
ಉತ್ತರ ದಿನಾಂಕ : 29.01.2021

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | NRDWP ಕೇಂದ್ರ ಪುರಸ್ಕೃತ ಯೋಜನೆಯ Support Activity ಘಟಕದಡಿ 2011-12ನೇ ಸಾಲಿನಲ್ಲಿ ನೇಮಕಗೊಂಡು ಕಾರ್ಯ ನಿರ್ವಹಿಸುವ BRC/CRCಗಳ ಸೇವೆಯನ್ನು ಮುಂದುವರೆಸುವ ಕುರಿತು ಈ ಹಿಂದಿನ ಅಧಿವೇಶನದಲ್ಲಿ ಸಚಿವರು ಭರವಸೆ ನೀಡಿರುವುದು ನಿಜವೇ; ಹಾಗಿದ್ದಲ್ಲಿ ಭರವಸೆ ಈಡೇರಿದೆಯೇ; | BRC/CRC ಸೇವೆಯನ್ನು ಮುಂದುವರೆಸುವ ಬಗ್ಗೆ ಮಾನವೀಯತೆ ದೃಷ್ಟಿಯಿಂದ ಪ್ರಯತ್ನಿಸಲಾಗುವುದೆಂದು ಭರವಸೆ ನೀಡಲಾಗಿರುತ್ತದೆ.<br><br>NRDWP ಯೋಜನೆಯು ದಿನಾಂಕ:31.03.2020ಕ್ಕೆ ಮುಕ್ತಾಯಗೊಂಡಿರುತ್ತದೆ. ಡಿಸೆಂಬರ್-2019ರಲ್ಲಿ ಹೊರಡಿಸಲಾದ ನೂತನ "ರಾಷ್ಟ್ರೀಯ ಜಲ ಜೀವನ್ ಮಿಷನ್" ಯೋಜನೆಯ ಮಾರ್ಗಸೂಚಿಗಳಲ್ಲಿ BRC/CRCಗಳ ಸೇವೆಯನ್ನು ಪಡೆಯುವ ಪ್ರಸ್ತಾಪಗಳಿಲ್ಲದ ಕಾರಣ ಅವರುಗಳ ಸೇವೆಯನ್ನು ದಿನಾಂಕ:31.03.2020ಕ್ಕೆ ಮುಕ್ತಾಯಗೊಳಿಸಲಾಗಿರುತ್ತದೆ. |
| ಆ) | ಸರ್ಕಾರದ ಭರವಸೆಯಂತೆ ಯಾವ ಯಾವ ಜಿಲ್ಲೆಗಳ ಎಷ್ಟು ಮಂದಿ BRC/CRC ಗಳ ಸೇವೆಯನ್ನು ಮುಂದುವರೆಸಲಾಗಿದೆ; (ವಿವರವಾದ ಮಾಹಿತಿ ನೀಡುವುದು) | NRDWP ಯೋಜನೆಯು ದಿನಾಂಕ 31.03.2020ಕ್ಕೆ ಮುಕ್ತಾಯಗೊಂಡಿರುವುದರಿಂದ ಯಾವುದೇ ಜಿಲ್ಲೆಗಳಲ್ಲಿ BRC/CRCಗಳ ಸೇವೆಯನ್ನು ಮುಂದುವರೆಸಿರುವುದಿಲ್ಲ. |
| ಇ) | ಮಾನ್ಯ ಉಚ್ಚ ನ್ಯಾಯಾಲಯ, ಬೆಂಗಳೂರು WP 5628/2020 ಹಾಗೂ ಇತರೆ ನ್ಯಾಯಾಲಯಗಳಲ್ಲಿ BRC/CRC ಸಂಯೋಜಕರುಗಳು ತಮ್ಮ ಸೇವೆಯನ್ನು ಜಲ ಜೀವನ್ ಮಿಷನ್ ಯೋಜನೆಯಲ್ಲೂ ಮುಂದುವರೆಸಲು ಧಾವೆ ಹೂಡಿರುವುದು ನಿಜವೇ; ಹಾಗದರೆ ಸರ್ಕಾರ ಇದರ ಸಂಬಂಧ ಯಾವ ಕ್ರಮ ಕೈಗೊಂಡಿದೆ? | ಸೇವೆಯನ್ನು ಮುಂದುವರೆಸುವ ಬಗ್ಗೆ ಮಾನ್ಯ ಉಚ್ಚ ನ್ಯಾಯಾಲಯ, ಬೆಂಗಳೂರು ಮತ್ತು ಧಾರವಾಡ ಪೀಠಗಳಲ್ಲಿ BRC/CRCಗಳು ಧಾವೆ ಹೂಡಿರುತ್ತಾರೆ.<br>ಸರ್ಕಾರವು ಮಾನ್ಯ ಉಚ್ಚ ನ್ಯಾಯಾಲಯ, ಬೆಂಗಳೂರು ಮತ್ತು ಧಾರವಾಡ ಪೀಠದ ಮಧ್ಯಂತರ ಆದೇಶಗಳನ್ವಯ BRC/CRCಗಳ ಸೇವೆಯನ್ನು ಮುಂದಿನ ವಿಚಾರಣಾ ದಿನಾಂಕದವರೆಗೂ ಮುಂದುವರೆಸಲು ಸಂಬಂಧಪಟ್ಟ ಜಿಲ್ಲಾ ಪಂಚಾಯಿತಿಗಳಿಗೆ ನಿರ್ದೇಶಿಸಲಾಗಿರುತ್ತದೆ.<br>ಸದರಿ ಧಾವೆಗಳಿಗೆ ಸಂಬಂಧಪಟ್ಟಂತೆ ಕಂಡಿಕೆವಾರು ಉತ್ತರ ಮತ್ತು Statement of Objections ಗಳನ್ನು ಮಾನ್ಯ ಉಚ್ಚ ನ್ಯಾಯಾಲಯದ ಸಂಬಂಧಪಟ್ಟ ಪೀಠಗಳಿಗೆ ಸಲ್ಲಿಸಲಾಗಿರುತ್ತದೆ. |
| ಈ) | BRC/CRC ಸಂಯೋಜಕರುಗಳ ಮನವಿಯ ಮೇರೆಗೆ ಕೇಂದ್ರ ಗ್ರಾಮೀಣ ಕುಡಿಯುವ ನೀರು ಮತ್ತು ನೈರ್ಮಲ್ಯ ಇಲಾಖೆಯು ರಾಜ್ಯ ಸರ್ಕಾರಗಳಿಗೆ ಆರ್ಥಿಕ ಮತ್ತು ತಾಂತ್ರಿಕ ನೆರವನ್ನು ಮಾತ್ರ ನೀಡುತ್ತಿರುವುದಾಗಿ ಸೂಚಿಸಿದ್ದು, ಸಿಬ್ಬಂದಿ ನೇಮಕ ವಿಚಾರ ರಾಜ್ಯ ಸರ್ಕಾರದ ವಿವೇಚನೆಗೆ ಬಿಟ್ಟಿರುವುದಾಗಿ ತಿಳಿಸಿರುವುದು ನಿಜವೇ; (ವಿವರವಾದ ಮಾಹಿತಿ ನೀಡುವುದು) | ಕೇಂದ್ರ ಪುರಸ್ಕೃತ ಜಲ ಜೀವನ್ ಮಿಷನ್ ಯೋಜನೆಯ ಮಾರ್ಗಸೂಚಿಯಲ್ಲಿ BRC/CRCಗಳಿಗೆ ಸಂಬಂಧಪಟ್ಟಂತೆ ಕೆಲಸ-ಕಾರ್ಯಗಳನ್ನು ಪ್ರಸ್ತಾಪಿಸಿರುವುದಿಲ್ಲ ಮತ್ತು ಸದರಿಯವರ ನೇಮಕ ಸಂಬಂಧ ಕೇಂದ್ರ ಸರ್ಕಾರದಿಂದ ವಿಶೇಷವಾದ ಸೂಚನೆಗಳನ್ನು ಇಲಾಖೆ ಪಡೆದಿರುವುದಿಲ್ಲ. |
| ಉ) | ಸದರಿ ಪ್ರಕರಣಕ್ಕೆ ಸಂಬಂಧಿಸಿದಂತೆ 7610CH ರಂತೆ ಸರ್ಕಾರವು Policy Decision ಮಾಡಬೇಕಾಗಿರುವುದು ನಿಜವೇ; | ಜಲ ಜೀವನ್ ಮಿಷನ್ ಯೋಜನೆಯ ಮಾರ್ಗಸೂಚಿಗಳಲ್ಲಿ BRC/CRCಗಳ ಪ್ರಸ್ತಾಪವಿರುವುದಿಲ್ಲ ಹಾಗು ಮುಂದುವರೆಸಲು ಆಸ್ಪದವಿರುವುದಿಲ್ಲ. |
| ಊ) | ಯಾವ ಕಾಲಮಿತಿಯಲ್ಲಿ ಸರ್ಕಾರವು Policy Decisionಗಳ ಸೇವೆಯನ್ನು ಯಥಾವತ್ತಾಗಿ ಮುಂದುವರೆಸುವುದು? | ಉದ್ಭವಿಸುವುದಿಲ್ಲ. |

ಸಂ:ಗ್ರಾಕುನೀ&ನೈಇ 129 ಗ್ರಾನೀಸ(4)2020

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು